# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 315(372) |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಮಂಜುನಾಥ್ ಭಂಡಾರಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 18-02-2022. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| (ಅ) | ರಾಜ್ಯದ ಮೂರು ಸ್ತರದ ಪಂಚಾಯತ್ ಸಂಸ್ಥೆಗಳ ಅಧ್ಯಕ್ಷರು ಉಪಾಧ್ಯಕ್ಷರು ಮತ್ತು ಸದಸ್ಯರಿಗೆ ನೀಡಲಾಗುತ್ತಿರುವ ಗೌರವ ಧನ ಮತ್ತು ಇತರ ಭತ್ಯೆಗಳು ಯಾವುವು:<br>(ಆದೇಶದ ಪ್ರತಿಯನ್ನು ಒದಗಿಸುವುದು) | 1. ರಾಜ್ಯದ ಮೂರು ಸ್ತರದ ಪಂಚಾಯತ್ ಸಂಸ್ಥೆಗಳ ಅಧ್ಯಕ್ಷರು ಉಪಾಧ್ಯಕ್ಷರು ಮತ್ತು ಸದಸ್ಯರಿಗೆ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 116 ಜಿಪಸ 2017, ದಿನಾಂಕ: 03.05.2017 ರನ್ವಯ ಮಾಹೆಯಾನ ಗೌರವಧನವನ್ನು ನೀಡಲಾಗುತ್ತಿದೆ.<br>2. ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ಗ್ರಾಮ ಪಂಚಾಯತಿ ಕೆಲಸಗಳ ನಿಮಿತ್ತ ಗ್ರಾಮ ಪಂಚಾಯತಿ ಪರಿಮಿತಿಗಳಾಚೆ ಮಾಡಿದ ಪ್ರಯಾಣಗಳಿಗಾಗಿ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತ್ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರುಗಳ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ) ನಿಯಮಗಳು, 1994 ರನ್ವಯ ಪ್ರಯಾಣ ಭತ್ಯೆ ಹಾಗೂ ದಿನ ಭತ್ಯೆಗಳನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ.<br>3. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 155 ಜಿಪಸ 2003ರನ್ವಯ ಉಪವೇಶನ ಶುಲ್ಕವನ್ನು ನೀಡಲಾಗುತ್ತಿದೆ.<br>4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 65 ತಾಪಸ 2011, ದಿನಾಂಕ: 28.09.2011 ರನ್ವಯ ತಾಲ್ಲೂಕು ಪಂಚಾಯತ್ ಅಧ್ಯಕ್ಷರು/ಉಪಾಧ್ಯಕ್ಷರಿಗೆ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>5. ಅಧಿಸೂಚನೆ ಸಂಖ್ಯೆ: ಗ್ರಾಅಪ 75 ಜಿಪಸ 2016, ದಿನಾಂಕ: 19.11.2016 ರನ್ವಯ ಜಿಲ್ಲಾ ಪಂಚಾಯತಿ ಅಧ್ಯಕ್ಷರ ಸಂಬಳ ಮತ್ತು ಭತ್ಯೆಗಳನ್ನು ನೀಡಲಾಗುತ್ತಿದೆ.<br>6. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 189 ಜಿಪಸ 2016, ದಿನಾಂಕ:25.11.2016 ರನ್ವಯ ಜಿಲ್ಲಾ ಪಂಚಾಯತಿ ಉಪಾಧ್ಯಕ್ಷರ ಗೌರವಧನ ಮತ್ತು ಭತ್ಯೆಗಳನ್ನು ನೀಡಲಾಗುತ್ತಿದೆ.<br><br>(ಮೇಲ್ಕಾಣಿಸಿದ ಎಲ್ಲಾ ಆದೇಶಗಳನ್ನು ಲಗತ್ತಿಸಿದೆ). |

| | | |
|---|---|---|
| (ಆ) | ಗ್ರಾಮ ಪಂಚಾಯತಿ ಸದಸ್ಯರ ಗೌರವ ಧನ ಮತ್ತು ಉಪವೇಶನ ಶುಲ್ಕಗಳನ್ನು ಹೆಚ್ಚಿಸಬೇಕೆನ್ನುವ ಬೇಡಿಕೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ:<br><br>ಈ ಬಗ್ಗೆ ಸರ್ಕಾರದ ಕ್ರಮವೇನು; | ಬಂದಿದೆ.<br><br>ಕಡತ ಸಂಖ್ಯೆ: ಗ್ರಾಅಪಂರಾ 298 ಜಿಪಸ 2021 ರಲ್ಲಿ ದಿನಾಂಕ:15.11.2021 ರಂದು ಗ್ರಾಮ ಪಂಚಾಯತಿ ಸದಸ್ಯರ ಗೌರವಧನವನ್ನು ಹೆಚ್ಚಿಸುವ ಕುರಿತು ಸರ್ಕಾರದಿಂದ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿ, ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 549 ವೆಚ್ಚ 6/2021 ದಿನಾಂಕ: 29.11.2021 ರಲ್ಲಿ ಪ್ರಸ್ತುತ ಹೆಚ್ಚುವರಿ ಹಣಕಾಸು ಕಾರ್ಯಭಾರವನ್ನು ಭರಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. |
| (ಇ) | ಗ್ರಾಮೀಣ ಭಾಗದ ಜನರ ಸಂಕಷ್ಟಗಳಿಗೆ ಸ್ಪಂದಿಸುವ ತಳ ಮಟ್ಟದ ಜನ ಪ್ರತಿನಿಧಿಗಳಾದ ಈ ಮೂರು ಸ್ತರದ ಸದಸ್ಯರಿಗೆ ಅವರ ಸದಸ್ಯತ್ವದ ಅವಧಿಯಲ್ಲಿ ನೀಡಬಹುದಾದ ಜೀವ ವಿಮಾ, ವೈದ್ಯಕೀಯ ವಿಮೆಯನ್ನು ಕಲ್ಪಿಸುವ ಬಗ್ಗೆ ಸರ್ಕಾರದ ಕ್ರಮಗಳೇನು ; | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993 ರಲ್ಲಿ ಚುನಾಯಿತ ಪ್ರತಿನಿಧಿಗಳಿಗೆ ಜೀವ ವಿಮೆ ಹಾಗೂ ವೈದ್ಯಕೀಯ ವಿಮೆ ಸೌಲಭ್ಯಗಳಿಗೆ ಅವಕಾಶವಿರುವುದಿಲ್ಲ. |
| (ಈ) | ಕಾಮಗಾರಿಯನ್ನು ಪರಿಶೀಲನಾ ಜವಾಬ್ದಾರಿ ಸ್ಥಳ ಪರಿಶೀಲನೆಯಂತಹ ಕಾರ್ಯಕಾರಿ ಕರ್ತವ್ಯ ಹೊಂದಿರುವ ಗ್ರಾಮ ಪಂಚಾಯತಿಯ ಅಧ್ಯಕ್ಷರಿಗೆ ಇಂಧನ ಭತ್ಯೆಯಂತಹ ಸೌಲಭ್ಯವನ್ನು ನೀಡಬೇಕೆನ್ನುವ ಬೇಡಿಕೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;<br><br>ಈ ಬಗ್ಗೆ ಸರ್ಕಾರದ ಕ್ರಮವೇನು ? | -ಇಲ್ಲ-<br><br>-ಉದ್ಭವಿಸುವುದಿಲ್ಲ- |

**ಸಂಖ್ಯೆ: ಗ್ರಾಅಪಂರಾ 72 ಜಿಪಸ 2022**

**(ಕೆ.ಎಸ್.ಈಶ್ವರಪ್ಪ)**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**



# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಚುನಾಯಿತ ಪ್ರತಿನಿಧಿಗಳಿಗೆ ಗೌರವಧನವನ್ನು ಹೆಚ್ಚಿಸುವ ಬಗ್ಗೆ.

ಓದಲಾಗಿದೆ:

1. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 75 ಜಿಪಸ 2014, ಬೆಂಗಳೂರು, ದಿನಾಂಕ:06-12-2014.
2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 75 ಜಿಪಸ 2016, ಬೆಂಗಳೂರು, ದಿನಾಂಕ:19-11-2016.
3. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 189 ಜಿಪಸ 2016, ಬೆಂಗಳೂರು, ದಿನಾಂಕ:25-11-2016.

ಪ್ರಸ್ತಾವನೆ:

ಮೇಲೆ ಓದಲಾದ(1) ಆದೇಶದಲ್ಲಿ 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ರಾಜ್ಯದ ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳಿಗೆ ಪ್ರಸ್ತುತ ನೀಡುತ್ತಿರುವ ಮಾಸಿಕ ಗೌರವಧನವನ್ನು ದಿನಾಂಕ:01-04-2014 ರಿಂದ ಅನ್ವಯಿಸುವಂತೆ ಇಮ್ಮಡಿಗೊಳಿಸಿದ್ದು, ಪರಿಷ್ಕೃತ ಗೌರವಧನ ಈ ಕೆಳಕಂಡಂತಿದೆ.

| | ಗ್ರಾಮ ಪಂಚಾಯತಿ | ತಾಲ್ಲೂಕು ಪಂಚಾಯತಿ | ಜಿಲ್ಲಾ ಪಂಚಾಯತಿ |
|---|---|---|---|
| ಅಧ್ಯಕ್ಷರು | 1000 | 4500 | 6000 |
| ಉಪಾಧ್ಯಕ್ಷರು | 600 | 3000 | 4500 |
| ಸದಸ್ಯರು | 500 | 1500 | 3000 |

ಮೇಲೆ ಓದಲಾದ (2)ರ ಆದೇಶದಲ್ಲಿ ಎಲ್ಲಾ ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರುಗಳಿಗೆ ಸಚಿವರ ಸ್ಥಾನಮಾನ ನೀಡಲಾಗಿದ್ದು, ಅವರ ವೇತನವನ್ನು ರೂ.35,000ಗಳಿಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ (3)ರ ಆದೇಶದಲ್ಲಿ ಎಲ್ಲಾ ಜಿಲ್ಲಾ ಪಂಚಾಯತ್‌ನ ಉಪಾಧ್ಯಕ್ಷರುಗಳ ಗೌರವಧನವನ್ನು ರೂ.15,000ಗಳಿಗೆ ಹೆಚ್ಚಿಸಲಾಗಿದೆ.

2017-18ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ರಾಜ್ಯದ ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳಿಗೆ ಪ್ರಸ್ತುತ ನೀಡುತ್ತಿರುವ ಮಾಸಿಕ ಗೌರವಧನವನ್ನು ದಿನಾಂಕ:01-04-2017 ರಿಂದ ಅನ್ವಯಿಸುವಂತೆ ಹೆಚ್ಚಿಸಲು ಘೋಷಣೆ ಮಾಡಿದೆ. ಆದುದರಿಂದ ಈ ಆದೇಶ.

## ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 116 ಜಿಪಸ 2017, ಬೆಂಗಳೂರು. ದಿನಾಂಕ:03-05-2017.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, 2017-18ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿರುವಂತೆ ರಾಜ್ಯದ ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳಿಗೆ ಪ್ರಸ್ತುತ ನೀಡುತ್ತಿರುವ ಮಾಸಿಕ ಗೌರವಧನವನ್ನು ದಿನಾಂಕ:01-04-2017 ರಿಂದ ಅನ್ವಯಿಸುವಂತೆ ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಿದೆ.

| | ಗ್ರಾಮ ಪಂಚಾಯತಿ | ತಾಲ್ಲೂಕು ಪಂಚಾಯತಿ | ಜಿಲ್ಲಾ ಪಂಚಾಯತಿ |
|---|---|---|---|
| ಅಧ್ಯಕ್ಷರು | 3000 | 6000 | 35000 |
| ಉಪಾಧ್ಯಕ್ಷರು | 2000 | 4000 | 15000 |
| ಸದಸ್ಯರು | 1000 | 3000 | 5000 |

ಮೇಲಿನ ವೆಚ್ಚವನ್ನು ಜಿಲ್ಲಾ ಪಂಚಾಯತ್‌ನ ಚುನಾಯಿತ ಪ್ರತಿನಿಧಿಗಳಿಗೆ ಗೌರವಧನವನ್ನು ಲೆಕ್ಕ ಶೀರ್ಷಿಕೆ:2515-00-101-0-35-324(2515-00-196-1-05-300), ತಾಲ್ಲೂಕು ಪಂಚಾಯತ್‌ಗೆ ಲೆಕ್ಕ ಶೀರ್ಷಿಕೆ: 2515-00-102-0-69-324(2515-00-197-1-10-300) ಹಾಗೂ ಗ್ರಾಮ ಪಂಚಾಯತ್‌ನ ಚುನಾಯಿತ ಪ್ರತಿನಿಧಿಗಳಿಗೆ ಲೆಕ್ಕ ಶೀರ್ಷಿಕೆ:2515-00-103-0-98-324(2515-00-198-1-11-300) ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಕೆ.ಯಾಲಕ್ಕೀಗೌಡ) 2/8/17
ನಿರ್ದೇಶಕರು (ಪಂ.ರಾಜ್-2)ಹಾಗೂ
ಸರ್ಕಾರದ ಪದನಿಮಿತ್ತ ಜಂಟಿಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಇವರಿಗೆ:

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
3. ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
4. ಉಪ ನಿರ್ದೇಶಕರು, ಖಜಾನೆ ಗಣಕ ಜಾಲ ನಿರ್ವಹಣಾ ಕೇಂದ್ರ, ಖನಿಜ ಭವನ, ಬೆಂಗಳೂರು.
5. ಜಿಲ್ಲಾ ಖಜಾನಾಧಿಕಾರಿಗಳು, ರಾಜ್ಯದ ಎಲ್ಲಾ ಜಿಲ್ಲೆಗಳು.
6. ರಾಜ್ಯದ ಎಲ್ಲಾ ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು.
7. ವಿಶೇಷಾಧಿಕಾರಿ, ಆರ್ಥಿಕ ಇಲಾಖೆ (ವೆಚ್ಚ-6), ವಿಧಾನ ಸೌಧ, ಬೆಂಗಳೂರು.
8. ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು.
9. ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು (ಆಯಾ ತಾಲ್ಲೂಕು ಪಂಚಾಯತಿ ಕಾರ್ಯನಿರ್ವಾಹಕ ಅಧಿಕಾರಿಗಳ ಮೂಲಕ).
10. ಗಣಕ ಕೋಶ - ಇಲಾಖಾ ವೆಬ್‌ಸೈಟ್‌ನಲ್ಲಿ ಅಳವಡಿಸಲು.
11. ಮುಖ್ಯ ಸಂಪಾದಕರು, ಕರ್ನಾಟಕ ವಿಕಾಸ ಮಾಸ ಪತ್ರಿಕೆ – ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು.
12. ಶಾಖಾ ರಕ್ಷಾ ಕಡತಕ್ಕೆ/ಹೆಚ್ಚುವರಿ ಪ್ರತಿ.

ಪ್ರತಿ:

1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಪಂ.ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ಬಹುಮಹಡಿಗಳ ಕಟ್ಟಡ, ಬೆಂಗಳೂರು.

# ಕರ್ನಾಟಕ ಸರ್ಕಾರ

ಸಂ. ಗ್ರಾಅಪ: 13 ಜಿಪಸ 2011

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ:26-04-2011

## ಸುತ್ತೋಲೆ

ವಿಷಯ: ಗ್ರಾಮ ಪಂಚಾಯತಿ ಸದಸ್ಯರುಗಳ ಉಪವೇಶನ ಶುಲ್ಕ ಮತ್ತು ಗೌರವಧನ ಪಾವತಿಸುವ ಬಗ್ಗೆ

ಉಲ್ಲೇಖ: 1. ಕನ್ನಡ ದಿನ ಪತ್ರಿಕೆ ಪ್ರಕಟಣೆ ದಿನಾಂಕ 25.03.2011.
2. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 155 ಜಿಪಸ 2//003,ದಿನಾಂಕ 01.80.2003
3. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 214 ಜಿಪಸ 2008,ದಿನಾಂಕ 22.8.2008

*****

ಉಲ್ಲೇಖ: 1ರಲ್ಲಿ ಓದಲಾದ ಪತ್ರಿಕೆ ಪ್ರಕಟಣೆಯ ಶೀರ್ಷಿಕೆ ರಾಜ್ಯದ ಗ್ರಾಮ ಪಂಚಾಯತ್ ಸದಸ್ಯರಿಗೆ ಸಭಾ ಭತ್ಯೆ ಕಡಿತ ; ರಲ್ಲಿ ಪ್ರಕಟಗೊಂಡ ಮಾಹಿತಿಯನ್ನು ಸರ್ಕಾರ ಗಮನಿಸಿದೆ. ಈ ಹಿನ್ನೆಲೆಯಲ್ಲಿ

ಉಲ್ಲೇಖ (2)ರಲ್ಲಿನ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:155 ಜಿಪಸ:2003 ದಿ:1-8-2003 ರನ್ವಯ ರಾಜ್ಯದ ಜಿಲ್ಲಾ ಪಂಚಾಯತ್ ಅಧ್ಯಕ್ಷ/ಉಪಾಧ್ಯಕ್ಷ ಹಾಗೂ ಸದಸ್ಯರುಗಳ ಗೌರವಧನವನ್ನು ಹಾಗೂ ಜಿಲ್ಲಾ ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳ ಸದಸ್ಯರಿಗೆ ಉಪವೇಶನ ಶುಲ್ಕವನ್ನು ಈ ಕೆಳಕಂಡ ದರಗಳಲ್ಲಿ ನೀಡಲಾಗಿದೆ. ಈ ವೆಚ್ಚವನ್ನು ಗ್ರಾ.ಪಂ./ತಾ.ಪಂ/ಜಿ.ಪಂ.ಗಳು ತಮ್ಮದೇ ಆದ ಸಂಪನ್ಮೂಲಗಳಿಂದ ಭರಿಸುವಂತೆ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಭತ್ಯೆಗಳು/ಶುಲ್ಕಗಳು | ಗ್ರಾಮ ಪಂಚಾಯತಿ | ತಾಲ್ಲೂಕು ಪಂಚಾಯತಿ | ಜಿಲ್ಲಾ ಪಂಚಾಯತಿ |
|---|---|---|---|---|
| 1 | ಉಪವೇಶನ ಶುಲ್ಕ | 100.00 | 150.00 | 200.00 |
| 2 | ಗೌರವಧನ | | | |
| | ಅಧ್ಯಕ್ಷರು | 500.00 | 2000.00 | 2750.00 |
| | ಉಪಾಧ್ಯಕ್ಷರು | 300.00 | 1300.00 | 2050.00 |
| | ಸದಸ್ಯರು | — | 700.00 | 1200.00 |

ಉಲ್ಲೇಖ (3) ರಲ್ಲಿನ ಸರ್ಕಾರದ ಆದೇಶದಲ್ಲಿ ರಾಜ್ಯದ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಮಾಸಿಕ ಗೌರವಧನವನ್ನು ಕೆಳಕಂಡಂತೆ ನೀಡಲು ಆದೇಶಿಸಲಾಗಿರುತ್ತದೆ.

ಭಾಗ–IV, ಸೆಕ್ಷನ್ 2–ಸಿ(i)ರಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (1993ರ ಕರ್ನಾಟಕ ಅಧಿನಿಯಮ 14) ಪ್ರಕರಣ 45ರ (2)ರ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ರಚಿಸಲು ಪ್ರಸ್ತಾವಿಸಿರುವ ಈ ನಿಯಮಗಳ ಕರಡನ್ನು ಸದರಿ ಅಧಿನಿಯಮದ ಪ್ರಕರಣ 311ರ ಉಪ–ಪ್ರಕರಣ (1)ರ ಮೇರೆಗೆ ಅಗತ್ಯಪಡಿಸಿದಂತೆ, ಪ್ರಕಟಿಸಿದ್ದು ಅದರಿಂದ ಬಾಧಿತರಾಗುವ ವ್ಯಕ್ತಿಗಳಿಂದ ಸದರಿ ಕರಡಿಗೆ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪ್ರಕಟಗೊಳಿಸಿದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ ತಿಳಿಸಬೇಕೆಂದು ಕೋರಿರುವುದರಿಂದ;

ಮತ್ತು ಸದರಿ ಗೆಜೆಟ್ ಸಾರ್ವಜನಿಕರಿಗೆ ದಿನಾಂಕ 23ನೇ ಸೆಪ್ಟೆಂಬರ್, 1994ರಂದು ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆ ಅಥವಾ ಸಲಹೆಗಳು ಬಾರದೇ ಇರುವುದರಿಂದ;

ಈಗ 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ (1993ರ ಕರ್ನಾಟಕ ಅಧಿನಿಯಮ 14) 311ನೇ ಪ್ರಕರಣದೊಂದಿಗೆ ಓದಲಾದಂತೆ ಪ್ರಕರಣ 46ರ ಉಪ–ಪ್ರಕರಣ (2)ರ ಮೇರೆಗೆ ಪ್ರಧಾನ ಮಾಡಲಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಈ ನಿಯಮಗಳನ್ನು ರಚಿಸುತ್ತದೆ, ಎಂದರೆ.–

**1. ಹೆಸರು ಮತ್ತು ಪ್ರಾರಂಭ.**–(1) ಈ ನಿಯಮಗಳನ್ನು **ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರುಗಳ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ) ನಿಯಮಗಳು, 1994** ಎಂದು ಕರೆಯತಕ್ಕದ್ದು.

(2) ಇವು ಕೂಡಲೇ ಜಾರಿಗೆ ಬರತಕ್ಕದು.

**2. ಪರಿಭಾಷೆಗಳು.**–ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು.–

(ಕ) **'ಅಧಿನಿಯಮ'** ಎಂದರೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (ಕರ್ನಾಟಕ ಅಧಿನಿಯಮ 1993ರ 14);

(ಖ) **'ಸದಸ್ಯ'** ಎಂದರೆ, ಗ್ರಾಮ ಪಂಚಾಯಿತಿಯ ಸದಸ್ಯ;

(ಗ) **'ಪ್ರಕರಣ'** ಎಂದರೆ, ಅಧಿನಿಯಮದ ಪ್ರಕರಣ;

(ಘ) **'ಗ್ರಾಮ ಪಂಚಾಯಿತಿ ಕೆಲಸ'** ಎಂದರೆ.–

(i) ಅಧ್ಯಕ್ಷ ಅಥವಾ ಉಪಾಧ್ಯಕ್ಷನಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯ ಪರಿಮಿತಿಗಳ ಹೊರಗೆ ಅವನ ಪದಕ್ಕೆ ಸಂಬಂಧಪಟ್ಟ ಯಾವುದೇ ಕೆಲಸ; ಮತ್ತು

(ii) ಒಬ್ಬ ಸದಸ್ಯನಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯ ಪರಿಮಿತಿಯೊಳಗೆ ಆಗಲಿ ಅಥವಾ ಪರಿಮಿತಿಗಳ ಹೊರಗಾಗಲಿ ಅವನ ಪದಕ್ಕೆ ಸಂಬಂಧಪಟ್ಟ ಯಾವುದೇ ಕೆಲಸ.

**3. ಪ್ರಯಾಣ ಮತ್ತು ದಿನಭತ್ಯೆಯ ವಿವರ.**–ಅಧ್ಯಕ್ಷ, ಉಪಾಧ್ಯಕ್ಷರ ಅಥವಾ ಸದಸ್ಯನಿಗೆ ಸಂದರ್ಭಾನುಸಾರ ಅಧ್ಯಕ್ಷ, ಉಪಾಧ್ಯಕ್ಷ ಅಥವಾ ಸದಸ್ಯನಾಗಿ ಅವನ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ, ಗ್ರಾಮ ಪಂಚಾಯಿತಿ ಪರಿಮಿತಿಗಳಾಚೆ ಅವನು ಮಾಡಿದ ಪ್ರಯಾಣಗಳಿಗಾಗಿ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಈ ಕೆಳಕಂಡ ದರಗಳಲ್ಲಿ ಸಂದಾಯ ಮಾಡತಕ್ಕದ್ದು.–

| | | |
|---|---|---|
| (i) | ರೈಲ್ವೆ ಸ್ಥಳಾವಕಾಶ | ಮೊದಲನೆ ದರ್ಜೆ |
| (ii) | ರೈಲ್ವೆ ಪ್ರಯಾಣಕ್ಕೆ ಪ್ರಾಸಂಗಿಕ ವೆಚ್ಚಗಳು | ಪ್ರತಿ 24 ಗಂಟೆಗಳ ಪ್ರಯಾಣಕ್ಕೆ ಪ್ರಾಸಂಗಿಕ ವೆಚ್ಚದ ದರ 14 ರೂಪಾಯಿಗಳು. ಪ್ರಯಾಣದ ಅವಧಿಯು 24 ಗಂಟೆಗಳ ಒಂದು ಭಾಗಾಂಶವಾಗಿರುವಲ್ಲಿ ಅಥವಾ 24 ಗಂಟೆಗಳನ್ನು ಮೀರಿದ, ಆದರೆ 24ರ ಗುಣಕವಾಗಿರದ ಗಂಟೆಗಳಿಗೆ ಸಂದಾಯ ಮಾಡುವ ಪ್ರಾಸಂಗಿಕ ವೆಚ್ಚಗಳು ಈ ಕೆಳಕಂಡಂತಿರತಕ್ಕದ್ದು:<br>(ಕ) ಆರು ಗಂಟೆಗಳನ್ನು ಮೀರದ ಪ್ರಯಾಣಕ್ಕೆ ಪ್ರಾಸಂಗಿಕ ವೆಚ್ಚದ ಶೇಕಡ 25;<br>(ಖ) ಆರು ಗಂಟೆಗಳನ್ನು ಮೀರಿದ, ಆದರೆ 12 ಗಂಟೆಗಳಿಗೆ ಮೀರದ ಪ್ರಯಾಣಕ್ಕೆ ಪ್ರಾಸಂಗಿಕ ವೆಚ್ಚ ದರದ ಶೇಕಡಾ 50;<br>(ಗ) 12 ಗಂಟೆಗಳಿಗೆ ಮೀರಿದ ಪ್ರಯಾಣಕ್ಕೆ ಪೂರ್ಣ ಪ್ರಾಸಂಗಿಕ ವೆಚ್ಚಗಳು. |
| (iii) | ಬಸ್ಸುಗಳು ಅಥವಾ ಸಾರ್ವಜನಿಕ ವಾಹನಗಳ ಸಾರಿಗೆ ವ್ಯವಸ್ಥೆ ಇರದ ಸ್ಥಳಗಳಿಗೆ ರಸ್ತೆಯ ಮೂಲಕ ಪ್ರಯಾಣಕ್ಕೆ | ಪ್ರತಿ ಕಿಲೋಮೀಟರಿಗೆ 40 ಪೈಸೆ. |
| (iv) | ರಾಜ್ಯದೊಳಗೆ ತಂಗುವಿಕೆಗಳಿಗೆ ದಿನಭತ್ಯೆ | (ಕ) ಬೆಂಗಳೂರಿನಲ್ಲಿ ತಂಗಲು ಪ್ರತಿ ದಿವಸಕ್ಕೆ 35 ರೂಪಾಯಿ;<br>(ಖ) ಇತರ ಸ್ಥಳಗಳಲ್ಲಿ ತಂಗಲು ಪ್ರತಿ ದಿವಸಕ್ಕೆ 25 ರೂಪಾಯಿ. |
| (v) | ಬಸ್ ಪ್ರಯಾಣ ಭತ್ಯೆ | ಒಂದೇ ಬಸ್ (ಹಾಸಲು) ಮತ್ತು ರೈಲು ಪ್ರಯಾಣಕ್ಕೆ ಅನ್ವಯವಾಗುವ ದರದಲ್ಲಿ ಪ್ರಾಸಂಗಿಕ ವೆಚ್ಚಗಳು. |

4. ಅತಿ ಕಡಿಮೆ ಹಾಗೂ ಅತ್ಯಂತ ಅಗ್ಗದ ಪ್ರಯಾಣ ಮಾರ್ಗವನ್ನು ಉಪಯೋಗಿಸಬೇಕು.—ಪ್ರಯಾಣ ಭತ್ಯೆಯನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ ಎರಡು ಸ್ಥಳಗಳ ನಡುವಿನ ಪ್ರಯಾಣವನ್ನು ಲಭ್ಯವಿರುವ ಕಡಿಮೆ ದೂರದ ಹಾಗೂ ಅತ್ಯಂತ ಅಗ್ಗದ ದರದ ಪ್ರಯಾಣ ಮಾರ್ಗದ ಮೂಲಕ ಮಾಡಬೇಕೆಂದು ಗ್ರಹಿಸತಕ್ಕದ್ದು:

ಪರಂತು ದೀರ್ಘ ಮಾರ್ಗದ ಮೂಲಕವಾದ ಪ್ರಯಾಣವು ಕಡಿಮೆ ಖರ್ಚಿನದಾದರೆ ಈ ನಿಯಮದ ಉದ್ದೇಶಕ್ಕಾಗಿ ಅತೀ ಅಗ್ಗದ ಪ್ರಯಾಣ ಮಾರ್ಗವನ್ನು ಅತ್ಯಂತ ಕಡಿಮೆ ದೂರದ ಮಾರ್ಗವೆಂದು ಭಾವಿಸತಕ್ಕದು.

5. ರೈಲು ಪ್ರಯಾಣದ ಸಂದರ್ಭದಲ್ಲಿ ಪ್ರಮಾಣ ಪತ್ರ.—ಪ್ರಯಾಣ ಭತ್ಯೆಯನ್ನು ಕ್ಲೇಮು ಮಾಡುವ ಅಧ್ಯಕ್ಷ, ಉಪಾಧ್ಯಕ್ಷ ಅಥವಾ ಸದಸ್ಯರು, ರೈಲಿನ ಯಾವ ದರ್ಜೆಯ ದರವನ್ನು ಕ್ಲೇಮು ಮಾಡಿರುವನೋ ಆ ದರ್ಜೆಯಲ್ಲಿ ಪ್ರಯಾಣ ಮಾಡಿದ ಬಗ್ಗೆ ಪ್ರಮಾಣ ಪತ್ರವನ್ನು ಅವನ ಪ್ರಯಾಣ ಭತ್ಯದ ಬಿಲ್ಲಿನಲ್ಲಿ ದಾಖಲು ಮಾಡತಕ್ಕುದು:

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-IVA | ಬೆಂಗಳೂರು, ಶನಿವಾರ, ನವೆಂಬರ್ ೧೯, ೨೦೧೬ (ಕಾರ್ತೀಕ ೨೮, ಶಕ ವರ್ಷ ೧೯೩೮) | ನಂ. ೧೨೮೫ |
|---|---|---|
| Part-IVA | Bengaluru, Saturday, November 19, 2016 (Karthika 28, Shaka Varsha 1938) | No. 1285 |


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಗ್ರಾಅಪ 75 ಜಿಪಸ 2016, ದಿನಾಂಕ:19-11-2016**

**ಕರ್ನಾಟಕ ಪಂಚಾಯತ್ ರಾಜ್(ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಸಂಬಳ ಮತ್ತು ಭತ್ಯೆಗಳು) (ತಿದ್ದುಪಡಿ) ನಿಯಮಗಳು 2016.**

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ, ಪ್ರಕರಣ 178 ರೊಡನೆ ಓದಿಕೊಂಡಂತೆ ಪ್ರಕರಣ 311 ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸಂಬಳ ಮತ್ತು ಭತ್ಯೆಗಳು) ನಿಯಮಗಳು, 1995 ನ್ನು ಮತ್ತಷ್ಟು ತಿದ್ದುಪಡಿ ಮಾಡಲು, ಕರಡು ಅಧಿಸೂಚನೆ ಸಂಖ್ಯೆ:ಗ್ರಾಅಪ 75 ಜಿಪಸ 2016, ದಿನಾಂಕ: 30-07-2016ನ್ನು ಕರ್ನಾಟಕ ರಾಜ್ಯ ಪತ್ರದ ಭಾಗ IVAಯ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸಿದ್ದು, ಈ ಮೂಲಕ ಭಾದಿತರಾಗುವರಿಂದ ಸದರಿ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ 15 ದಿನಗಳೊಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ, ಪ್ರಕಟಿಸಿರುವುದರಿಂದ,

ಮತ್ತು ದಿನಾಂಕ:02-08-2016 ರಂದು ವಿಶೇಷ ರಾಜ್ಯಪತ್ರದಲ್ಲಿ ಸದರಿ ಅಧಿಸೂಚೆನಯನ್ನು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ,

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗಿದ್ದು, ಸದರಿ ಆಕ್ಷೇಪಣೆ/ಸಲಹೆಗಳನ್ನು ಪರಿಗಣಿಸಲಾಗಿರುವುದರಿಂದ,

ಆದ್ದರಿಂದ, ಈಗ ಕರ್ನಾಟಕ ಗ್ರಾಮ್ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ,1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ:14)ರ ಪ್ರಕರಣ 178ರೊಡನೆ ಓದಿಕೊಂಡಂತೆ 311ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡಂತೆ ತಿದ್ದುಪಡಿ ನಿಯಮಗಳನ್ನು ರಚಿಸುತ್ತದೆ, ಅಂದರೆ,-

### ನಿಯಮಗಳು

**1. ಹೆಸರು ಮತ್ತು ಪ್ರಾರಂಭ:-** (1) ಈ ನಿಯಮಗಳನ್ನು ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಸಂಬಳ ಮತ್ತು ಭತ್ಯೆಗಳು) (ತಿದ್ದುಪಡಿ) ನಿಯಮಗಳು, 2016 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಮೇ 01, 2016 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರತಕ್ಕದ್ದು.

2. ನಿಯಮ 2 ರ ತಿದ್ದುಪಡಿ:– ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಸಂಬಳ ಮತ್ತು ಭತ್ಯೆಗಳು) ನಿಯಮಗಳು 1995 (ಇಲ್ಲಿ ಇನ್ನು ಮುಂದೆ ಮೂಲ ನಿಯಮಗಳು ಎಂದು ಉಲ್ಲೇಖಿತವಾಗಿದೆ) ನಿಯಮ 2 ರಲ್ಲಿ, ಖಂಡ (ಎ)ಯ ಬದಲಾಗಿ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಅಂದರೆ,–

"(ಎ)" "ಅಧಿನಿಯಮ" ಎಂದರೆ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993, (1993 ರ ಕರ್ನಾಟಕ ಅಧಿನಿಯಮ 14)."

3. ನಿಯಮ 3 ರ ತಿದ್ದುಪಡಿ:– ಮೂಲ ನಿಯಮಗಳ, ನಿಯಮ 3 ರ, ಉಪನಿಯಮ (1)ರಲ್ಲಿ "ಎರಡು ಸಾವಿರದ ಎರಡು ನೂರಾ ಐವತ್ತು ರೂಪಾಯಿಗಳ ಸಂಬಳ" ಎಂಬ ಪದಗಳಿಗೆ "ಮೂವತ್ತೈದು ಸಾವಿರ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದು.

4. ನಿಯಮ 4 ರ ತಿದ್ದುಪಡಿ:– ಮೂಲ ನಿಯಮಗಳ ನಿಯಮ 4 ರ ಕೋಷ್ಟಕದಲ್ಲಿ,–

(ಎ) ಕ್ರಮ ಸಂಖ್ಯೆ (i)ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (2)ನೇ ಕಾಲಂನಲ್ಲಿ "5000.00" ಎಂಬ ಸಂಖ್ಯೆಗಳಿಗೆ "ಮಾಸಿಕ 20,000.00 ಲೋಕೋಪಯೋಗಿ ಇಲಾಖೆಯ ಮೌಲ್ಯಮಾಪನಕ್ಕೆ ಒಳಪಟ್ಟು ಬೆಂಗಳೂರು ನಗರದಲ್ಲಿ ಮಾಸಿಕ ರೂ.40,000/– ಹಾಗೂ ಇತರೆ ನಗರಗಳಲ್ಲಿ ಮಾಸಿಕ ರೂ.20,000/–ಗರಿಷ್ಠ ಬಾಡಿಗೆ ಮನೆಯನ್ನು ಪಡೆಯಬಹುದಾಗಿದೆ." ಎಂಬ ಸಂಖ್ಯೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು

(ಬಿ) ಕ್ರಮ ಸಂಖ್ಯೆ (ii)ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (2)ನೇ ಕಾಲಂನಲ್ಲಿ "4000.00"ಎಂಬ ಅಂಕಿಗಳಿಗೆ "ಮಾಸಿಕ ರೂ.20,000.00" ಎಂಬ ಪದ ಮತ್ತು ಸಂಖ್ಯೆಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಸಿ) ಕ್ರಮ ಸಂಖ್ಯೆ (iii)ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (2)ನೇ ಕಾಲಂನಲ್ಲಿ "3000.00"ಎಂಬ ಸಂಖ್ಯೆಗಳಿಗೆ "ಮಾಸಿಕ ರೂ.20,000.00" ಎಂಬ ಪದ ಮತ್ತು ಸಂಖ್ಯೆಗಳನ್ನು ಪ್ರತಿಯೋಜಿಸತಕ್ಕದ್ದು.

5. ನಿಯಮ 5 ರ ತಿದ್ದುಪಡಿ:– ಮೂಲ ನಿಯಮಗಳ ನಿಯಮ 5ಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"5. ವಾಹನ ಸೌಕರ್ಯ.– (1) ಅಧ್ಯಕ್ಷರಿಗೆ ಚಾಲಕ ಸಹಿತವಾದ ರೂ 16.00 ಲಕ್ಷಕ್ಕೆ ಮೀರದಂತೆ ಸರ್ಕಾರಿ ಕಾರನ್ನು ಮತ್ತು 550 ಲೀಟರಿಗೆ ಸಮಾನವಾದ ಇಂಧನ ಭತ್ಯೆಯನ್ನು ಒದಗಿಸತಕ್ಕದ್ದು.

(2) ಉಪಾಧ್ಯಕ್ಷರಿಗೆ ಚಾಲಕ ಸಹಿತವಾದ ಸರ್ಕಾರಿ ಕಾರನ್ನು ಒದಗಿಸತಕ್ಕದ್ದು."

6. ನಿಯಮ 6 ರ ತಿದ್ದುಪಡಿ:– ಮೂಲ ನಿಯಮಗಳ, ನಿಯಮ 6 ರ ಉಪನಿಯಮ (1)ರ ಬದಲಾಗಿ ಈ ಕೆಳಕಂಡ ಉಪನಿಯಮವನ್ನು ಪ್ರತಿಯೋಜಿಸತಕ್ಕದ್ದು, ಅಂದರೆ,–

"(1) ಅಧ್ಯಕ್ಷರು ಕರ್ನಾಟಕ ಸಚಿವರುಗಳ ವೇತನ ಮತ್ತು ಭತ್ಯೆಗಳ ಅಧಿನಿಯಮ ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳನ್ವಯ ರಾಜ್ಯ ಸಚಿವರಿಗೆ ನೀಡಲಾಗುವ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

(1ಎ) ಉಪಾಧ್ಯಕ್ಷರು ತಮ್ಮ ಕಾರ್ಯ ನಿರ್ವಹಿಸುವ ಸಲುವಾಗಿ "ಎ" ಗುಂಪಿಗೆ ಸೇರಿದ ಕರ್ನಾಟಕ ಸರ್ಕಾರದ ಅಧಿಕಾರಿಗಳಿಗೆ ಅನುಮತಿಸತಕ್ಕಂಥ ದರಗಳಲ್ಲಿ ಪ್ರಯಾಣ ಭತ್ಯೆ ಹಾಗೂ ದಿನಭತ್ಯೆಗಳನ್ನು ಕಾಲಕಾಲಕ್ಕೆ ಪಡೆಯಲು ಅರ್ಹವುಳ್ಳವರಿರುತ್ತಾರೆ".

7. ನಿಯಮ 8 ರ ತಿದ್ದುಪಡಿ:– ಮೂಲ ನಿಯಮಗಳ, ನಿಯಮ 8ಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"8. ಅತಿಥಿ ಭತ್ಯೆ– ಅಧ್ಯಕ್ಷ ಹಾಗೂ ಉಪಾಧ್ಯಕ್ಷರು ಅನುಕ್ರಮವಾಗಿ ವಾರ್ಷಿಕ ಎರಡು ಲಕ್ಷ ರೂಪಾಯಿಗಳು ಮತ್ತು ಒಂಭತ್ತು ಸಾವಿರದ ಆರುನೂರು ರೂಪಾಯಿಗಳ ಅತಿಥಿ ಭತ್ಯೆ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ."

8. ನಿಯಮ 9, 10 ಮತ್ತು 11 ರ ಸೇರ್ಪಡೆ:- ಮೂಲನಿಯಮಗಳ ನಿಯಮ 8ರ ನಂತರ ಈ ಕೆಳಕಂಡ ನಿಯಮಗಳನ್ನು ಸೇರಿಸತಕ್ಕದ್ದು. ಅಂದರೆ,-

"9. ದೂರವಾಣಿ.- ಅಧ್ಯಕ್ಷರ ಅಧಿಕೃತ ಉಪಯೋಗಕ್ಕಾಗಿ ಒಂದು ನಿವಾಸ ದೂರವಾಣಿಯನ್ನು ಅಧ್ಯಕ್ಷರ ಸ್ವಂತ ನಿವಾಸದಲ್ಲಿ ಅಥವಾ ಬಾಡಿಗೆ ಪಡೆದ ನಿವಾಸದಲ್ಲಿ ಒದಗಿಸತಕ್ಕದ್ದು."

10. ವೈದ್ಯಕೀಯ ವೆಚ್ಚ.- ಅಧ್ಯಕ್ಷರು ವೈದ್ಯಕೀಯ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.

11.ಆಪ್ತ ಸಿಬ್ಬಂಧಿ .- ಜಿಲ್ಲಾ ಪಂಚಾಯತ್‌ಗಳ ಅಧ್ಯಕ್ಷರುಗಳು ಈ ಕೆಳಕಂಡ ಆಪ್ತ ಸಿಬ್ಬಂದಿಯನ್ನು ಹೊಂದಬಹುದಾಗಿದೆ. ಅಂದರೆ,-

ಅ) ಆಪ್ತ ಕಾರ್ಯದರ್ಶಿ- 1 ಹುದ್ದೆ

ಆ) 'ಸಿ' ವೃಂದ - 2 ಹುದ್ದೆಗಳು

ಇ) 'ಡಿ' ವೃಂದ - 2 ಹುದ್ದೆಗಳು

ಈ) ವಾಹನ ಚಾಲಕ - 1 ಹುದ್ದೆ.

ಈ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬತಕ್ಕದ್ದು. ಆಪ್ತ ಕಾರ್ಯದರ್ಶಿ, ಹುದ್ದೆಯನ್ನು ಗ್ರೂಪ್ ಎ/ ಗ್ರೂಪ್ ಬಿ ಶ್ರೇಣಿಯ ಅಧಿಕಾರಿಗಳನ್ನು ನಿಯೋಜನೆಯ ಮೂಲಕ ಭರ್ತಿ ಮಾಡತಕ್ಕದ್ದು, ಉಳಿದ ಸಿಬ್ಬಂದಿಗಳನ್ನು ಅಂದರೆ ಗ್ರೂಪ್ ಸಿ ಮತ್ತು ಗ್ರೂಪ್ ಡಿ ನೌಕರರನ್ನು ಆಡಳಿತ ಹಾಗೂ ಇನ್ನಿತರೆ ಇಲಾಖೆಗಳಲ್ಲಿ ಸೂಕ್ತ ಸಿಬ್ಬಂದಿ ಇಲ್ಲದಿದ್ದ ಪಕ್ಷದಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ಅಧ್ಯಕ್ಷರ ಕಾರ್ಯಾವಧಿಗೆ ಮಾತ್ರ ನೇಮಿಸಿಕೊಳ್ಳತಕ್ಕದ್ದು.

ಅಧ್ಯಕ್ಷರುಗಳು ಇಚ್ಛಿಸುವ ವ್ಯಕ್ತಿಗಳನ್ನು ರಾಜ್ಯ ಸರ್ಕಾರ/ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಉದ್ದಿಮೆಗಳು ಅಥವಾ ಕೇಂದ್ರ ಸರ್ಕಾರ ಉದ್ದಿಮೆಗಳು ಅಥವಾ ಸ್ವಾಯತ್ತ ಸಂಸ್ಥೆಗಳು, ನಿಗಮ ಅಥವಾ ಸ್ಥಳೀಯ ಸಂಸ್ಥೆಗಳು ಇತ್ಯಾದಿಗಳಿಂದ ನಿಯೋಜನೆ ಮೂಲಕ ಪಡೆಯಬಹುದು. ಈ ನಿಯೋಜನೆಯು ಅಧ್ಯಕ್ಷರ ಅವಧಿಯೊಂದಿಗೆ ಮುಕ್ತಾಯಗೊಳ್ಳುವುದು.

ಆಪ್ತ ಕಾರ್ಯದರ್ಶಿ, ಹುದ್ದೆಯನ್ನು ಗ್ರೂಪ್ ಎ/ ಗ್ರೂಪ್ ಬಿ ಶ್ರೇಣಿಯ ಅಧಿಕಾರಿಗಳನ್ನು ನಿಯೋಜನೆಯ ಮೂಲಕ ಭರ್ತಿ ಮಾಡತಕ್ಕದ್ದು, ಉಳಿದ ಸಿಬ್ಬಂದಿಗಳನ್ನು ಅಂದರೆ ಗ್ರೂಪ್ ಸಿ ಮತ್ತು ಗ್ರೂಪ್ ಡಿ ನೌಕರರನ್ನು ಆಡಳಿತ ಹಾಗೂ ಇನ್ನಿತರೆ ಇಲಾಖೆಗಳಲ್ಲಿ ಸೂಕ್ತ ಸಿಬ್ಬಂದಿ ಇಲ್ಲದಿದ್ದ ಪಕ್ಷದಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ಅಧ್ಯಕ್ಷರ ಕಾರ್ಯಾವಧಿಗೆ ಮಾತ್ರ ನೇಮಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯ ಉದ್ದಿಮೆಗಳ ಮಹೋದ್ಯಮದ ಮಾರ್ಗಸೂಚಿಗಳು (ಅಧ್ಯಕ್ಷರಿಗೆ ಆಪ್ತ ಸಿಬ್ಬಂದಿಯನ್ನು ನೀಡುವ ಬಗ್ಗೆ) ಅನ್ವಯಿಸುವುದಿಲ್ಲ ಹಾಗೂ ಮೇಲೆ ನಿಗಧಿಪಡಿಸುವ ಸಿಬ್ಬಂದಿ ಮಾದರಿಯು ಮಾತ್ರ ಅನ್ವಯಿಸುತ್ತದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

(ಪಿ.ದೇವಸಹಾಯಂ)
ಸರ್ಕಾರದ ಅಧೀನ ಕಾರ್ಯದರ್ಶಿ(ಜಿ.ಪಂ)(ಪ್ರ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಡಿ7) ಪ್ರತಿಗಳು:

ವಿಷಯ: ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳ ಉಪಾಧ್ಯಕ್ಷರುಗಳಿಗೆ ಹೆಚ್ಚಿನ ವೇತನ ಭತ್ಯೆ ಇತರೆ ಸೌಲಭ್ಯಗಳನ್ನು ನೀಡುವ ಬಗ್ಗೆ.

ಓದಲಾಗಿದೆ:

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಜಿಪಸ 2016, ದಿನಾಂಕ:19-11-2016.

ಪ್ರಸ್ತಾವನೆ:

ಮೇಲೆ ಓದಲಾದ (1)ರ ಆದೇಶದಲ್ಲಿ ರಾಜ್ಯ ಸರ್ಕಾರವು ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರುಗಳಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಿದ್ದು, ಅವರ ವೇತನ ಮತ್ತು ಭತ್ಯೆಗಳನ್ನು ಪರಿಷ್ಕರಿಸಲಾಗಿದೆ.

ಅನೇಕ ಜಿಲ್ಲಾ ಪಂಚಾಯತಿಗಳ ಉಪಾಧ್ಯಕ್ಷರುಗಳು ಸರ್ಕಾರಕ್ಕೆ ಮನವಿ ಸಲ್ಲಿಸಿ ವೇತನ ಮನೆ ಬಾಡಿಗೆ, ವಾಹನ ಸೌಕರ್ಯ, ಇಂಧನ ಭತ್ಯೆ, ದೂರವಾಣಿ, ಪ್ರವಾಸ ಭತ್ಯೆ ಇತ್ಯಾದಿ ಸೌಲಭ್ಯವನ್ನು ಹೆಚ್ಚಿಸುವಂತೆ ಮನವಿ ಮಾಡಿರುತ್ತಾರೆ

ಸದರಿ ಜಿಲ್ಲಾ ಪಂಚಾಯತ್‌ಗಳ ಉಪಾಧ್ಯಕ್ಷರುಗಳ ಮನವಿಗಳನ್ನು ಸರ್ಕಾರವು ಪರಿಶೀಲಿಸಲಾಗಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳ ಉಪಾಧ್ಯಕ್ಷರ ವೇತನ ಮತ್ತು ಭತ್ಯೆಗಳನ್ನು ಹೆಚ್ಚಿಸಲು ತೀರ್ಮಾನಿಸಿ ಅದರಂತೆ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ: 189 :ಜಿಪಸ:2016 ಬೆಂಗಳೂರು ದಿನಾಂಕ:25-11-2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳ ಉಪಾಧ್ಯಕ್ಷರುಗಳಿಗೆ ಈ ಕೆಳಕಂಡಂತೆ ಗೌರವಧನ ಮತ್ತಿತರ ಭತ್ಯೆಗಳನ್ನು ನೀಡಿ ಆದೇಶಿಸಿದೆ.

(ರೂಗಳಲ್ಲಿ)

| ಕ್ರಸಂ | ವಿವರ | ಭತ್ಯೆ |
|---|---|---|
| 1 | ಗೌರವಧನ | 15,000.00 |
| 2 | ದಿನ ಪತ್ರಿಕೆ | 500.00 |
| 3 | ಇಂದನ ವೆಚ್ಚ (ಮಾಹೆಯಾನ) | 400ಲೀ |
| 4 | ದೂರವಾಣಿ (ಕಛೇರಿ) | 5,000.00 |
| 5 | ಮನೆ ಬಾಡಿಗೆ ವೆಚ್ಚ | |
| | – ಬೆಂಗಳೂರು | 15,000.00 |
| | – ರಾಜ್ಯದ ಇತರೆ | 10,000.00 |
| 6 | ಆತಿಥ್ಯ ಭತ್ಯೆ (ವಾರ್ಷಿಕ) | 25,000.00 |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 288 ವೆಚ್ಚ-6/2016, ದಿನಾಂಕ: 22-11-2016 ರನ್ವಯ ಹೊರಡಿಸಲಾಗಿದೆ. ಈಗಾಗಲೇ ಉಪಾಧ್ಯಕ್ಷರಿಗೆ ನೀಡುತ್ತಿದ್ದ ಲೆಕ್ಕ ಶೀರ್ಷಿಕೆಯಲ್ಲಿ ಡಿಸೆಂಬರ್ 2016ರಿಂದ ಅನ್ವಯವಾಗುವಂತೆ ಮೇಲಿನ ಗೌರವಧನ ಮತ್ತು ಇತರೆ ಭತ್ಯೆಗಳನ್ನು ಪಾವತಿಸಲು ಅಗತ್ಯ ಕ್ರಮ ಕೈಗೊಳ್ಳಲು ತಿಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

25/11/16

(ಕೆ.ಯಾಲಕ್ಕಿ ಗೌಡ)
ನಿರ್ದೇಶಕರು (ಪಂ.ರಾಜ್-2)ಹಾಗೂ
ಸರ್ಕಾರದ ಪದನಿಮಿತ್ತ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

25-11-16

ಗೆ:

1. ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ ಬೆಂಗಳೂರು, ರಾಜ್ಯ ಪತ್ರದಲ್ಲಿ ಪ್ರಕಟಿಸಲು ಹಾಗೂ 300 ಪ್ರತಿಗಳನ್ನು ಸರಬರಾಜು ಮಾಡಲು ಕೋರಿದೆ.
2. ಮಹಾಲೇಖಪಾಲರು, ಕರ್ನಾಟಕ ರಾಜ್ಯ ಬೆಂಗಳೂರು.
3. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾಯನಿರ್ವಾಹಕ ಅಧಿಕಾರಿಗಳು, ಖಜಾನಾಧಿಕಾರಿಗಳು.
4. ರಾಜ್ಯದ ಎಲ್ಲಾ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತಿಗಳು.
5. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿನ ಉಪಾಧ್ಯಕ್ಷರು.
6. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ(ಜಿಲ್ಲಾ ಪಂಚಾಯತಿ).
7. ಗಣಕ ಕೋಶ– ಇಲಾಖಾ ವೆಬ್‌ಸೈಟ್‌ನಲ್ಲಿ ಅಳವಡಿಸಲು.
8. ಶಾಖಾ ರಕ್ಷಾ ಕಡತಕ್ಕೆ/ಹೆಚ್ಚುವರಿ ಪ್ರತಿ.

ಪ್ರತಿ:

1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. ಇವರ ಆಪ್ತ ಕಾರ್ಯದರ್ಶಿಗಳು, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು(ಪಂ.ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ಬಹುಮಹಡಿಗಳ ಕಟ್ಟಡ, ಬೆಂಗಳೂರು.